# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 311 (2383)
2. ಸದಸ್ಯರ ಹೆಸರು : ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 22.03.2022
4. ಉತ್ತರಿಸುವ ಸಚಿವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೈಗಾರಿಕೆಗಳ ಸ್ಥಾಪನೆಗೆ ರೈತರಿಂದ ಸ್ವಾಧೀನಪಡಿಸಿಕೊಂಡ ಜಮೀನು ಎಷ್ಟು; | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಭೂಸ್ವಾಧೀನಪಡಿಸಿದ ಜಮೀನಿನ ವಿವರ ಈ ಕೆಳಕಂಡಂತಿದೆ:-<br>ಕೈಗಾರಿಕಾ ಪ್ರದೇಶ — 83058-35 ಎಕರೆ<br>ಏಕಘಟಕ ಸಂಕೀರ್ಣ — 79017-25 ಎಕರೆ<br>ಒಟ್ಟು — 162076-20 ಎಕರೆ |
| (ಆ) | ಸ್ವಾಧೀನಪಡಿಸಿಕೊಂಡ ಜಮೀನಿಗೆ ಮಾರ್ಗಸೂಚಿ ದರಗಳ ಪ್ರಕಾರ ಸೂಕ್ತ ಬೆಲೆಯನ್ನು ನಿಗಧಿ ಮಾಡಲಾಗಿದೆಯೇ; ಹಾಗೂ ಪಾವತಿ ಮಾಡಲಾಗಿದೆಯೇ; | ಕೆ.ಐ.ಎ.ಡಿ.ಬಿ. ವತಿಯಿಂದ ಭೂಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಪರಿಹಾರ ದರ ನಿಗದಿಪಡಿಸುವ ಕುರಿತು ಆಯಾ ಜಿಲ್ಲೆಯ ಜಿಲ್ಲಾಧಿಕಾರಿ ಮತ್ತು ವಿಶೇಷ ಜಿಲ್ಲಾಧಿಕಾರಿ, ಕೆ.ಐ.ಎ.ಡಿ.ಬಿ. ಇವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಭೂದರ ನಿರ್ಧರಣಾ ಸಲಹಾ ಸಮಿತಿ ಸಭೆಗಳಲ್ಲಿ ಭೂಮಾಲೀಕರೊಂದಿಗೆ ಸಮಾಲೋಚಿಸಿ, ಆಯಾ ಗ್ರಾಮದ ಮಾರ್ಗಸೂಚಿ ದರ ಹಾಗೂ ಮಾರುಕಟ್ಟೆ ದರಗಳನ್ನು ಆಧರಿಸಿ ಸದರಿ ಸಮಿತಿಯು ಶಿಫಾರಸ್ಸು ಮಾಡುವ ದರಕ್ಕೆ ಮಂಡಳಿ ಸಭೆಯ ಅನುಮೋದನೆ ಪಡೆದು ಭೂಪರಿಹಾರ ದರ ನಿಗದಿಪಡಿಸಲಾಗುತ್ತಿದೆ. |

| | | |
|---|---|---|
| | | ಭೂಪರಿಹಾರ ಪಡೆಯಲು ಇಚ್ಛಿಸುವ ಜಮೀನಿನ ಮಾಲೀಕರಿಗೆ ನಿಯಮಾನುಸಾರ ಪರಿಹಾರ ಪಾವತಿಸಲು ಹಾಗೂ ಸದರಿ ದರದಲ್ಲಿ ಪರಿಹಾರ ಪಡೆಯಲು ಇಚ್ಛಿಸದ ಹಾಗೂ ಜಮೀನಿನ ಹಕ್ಕಿನ ಬಗ್ಗೆ ವಿವಾದಗಳಿರುವ ಪ್ರಕರಣಗಳಲ್ಲಿ ನಿಯಮಾನುಸಾರ ಐತೀರ್ಪು ರಚಿಸಿ ಪರಿಹಾರ ಧನವನ್ನು ಸಂಬಂಧಪಟ್ಟ ನ್ಯಾಯಾಲಯದಲ್ಲಿ ಠೇವಣಿ ಇಡಲು ಕ್ರಮ ಕೈಗೊಳ್ಳಲಾಗುತ್ತಿದೆ. |
| (ಇ) | ಕೈಗಾರಿಕಾ ಸ್ಥಾಪನೆಗೆ ಜಮೀನು ನೀಡಿರುವ ರೈತರಿಗೆ ಬದಲಿ ಜಮೀನು ಒದಗಿಸುವ ಪ್ರಸ್ತಾಪ ಸರ್ಕಾರದ ಮುಂದಿದೆಯೇ? | ಕೈಗಾರಿಕಾ ಸ್ಥಾಪನೆಗೆ ಜಮೀನು ನೀಡಿರುವ ರೈತರಿಗೆ ಬದಲಿ ಜಮೀನು ನೀಡಲು ಅವಕಾಶವಿರುವುದಿಲ್ಲ. ಆದರೆ, ಕೆ.ಐ.ಎ.ಡಿ.ಬಿ. ವತಿಯಿಂದ ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನಗೊಂಡ ಪ್ರತಿ ಎಕರೆ ಜಮೀನಿಗೆ ಭೂಪರಿಹಾರದ ಬದಲಾಗಿ ಅದೇ ಕೈಗಾರಿಕಾ ಪ್ರದೇಶದಲ್ಲಿ ಅಭಿವೃದ್ಧಿಪಡಿಸಿದ 10,781 ಚ.ಅಡಿ ವಿಸ್ತೀರ್ಣದ ಜಮೀನನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. |

ಸಂಖ್ಯೆ: ಸಿಐ 119 ಐಎಪಿ(ಇ) 2022

(ಡಾ॥ ಮುರುಗೇಶ್ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು